ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ದೇವಸ್ಥಾನಗಳಿಗೆ ಅನುದಾನ ಮಂಜೂರು ಮಾಡುವ ಬಗ್ಗೆ

ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

175 (316) ಮಾನ್ಯ ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಎಷ್ಟು ದೇವಸ್ಥಾನ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಅನುದಾನವನ್ನು ಮಂಜೂರು ಮಾಡಲಾಗಿದೆ ; ಇನ್ನೂ ಅನುದಾನ ಬಾಕಿ ಇರುವ ಸಂಸ್ಥೆಗಳೆಷ್ಟು; (ಕಳೆದ ಎರಡು ವರ್ಷಗಳ ಮಾಹಿತಿ ನೀಡುವುದು)

(ಆ) ಹಲವಾರು ವರ್ಷಗಳಿಂದ ಅನೇಕ ದೇವಸ್ಥಾನಗಳ ಸಮಿತಿಯವರು ಅನುದಾನಕ್ಕೆ ಬೇಡಿಕೆ ಇಟ್ಟಿದ್ದರೂ ಹಣಕಾಸಿನ ಕೊರತೆಯಿಂದ ನೀಡದಿರುವುದು ನಿಜವೇ ; ಹೆಚ್ಚಿನ ಅನುದಾನವನ್ನು ಆರ್ಥಿಕ ಇಲಾಖೆಯಿಂದ ಪಡೆದು ಹೆಚ್ಚು ಧಾರ್ಮಿಕ ಸಂಸ್ಥೆ ಮತ್ತು ದೇವಾಲಯಗಳಿಗೆ ಅನುದಾನ ಮಂಜೂರು ಮಾಡಲು ಸರ್ಕಾರ ಕ್ರಮ ಕೈಗೊಳ್ಳುತ್ತದೆಯೇ ;

(ಇ) ಅನುದಾನ ನೀಡುವಾಗ ಶಾಸಕರು ಮತ್ತಿತರ ಜನಪ್ರತಿನಿಧಿಗಳು ಮಾಡುವ ಶಿಫಾರಸ್ಸುಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದೇ; ಈ ಬಗ್ಗೆ ಸರ್ಕಾರ ಅನುಸರಿಸುವ ಕ್ರಮಗಳೇನು ?